# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು** | : | **ಶ್ರೀ ಮುನಿರಾಜು ಗೌಡ**<br>**~~(ವಿಧಾನ ಸಭೆಯಿಂದ ಚುನಾಯಿತರಾದವರು)~~** |
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | **64** |
| **ಉತ್ತರಿಸಬೇಕಾದ ದಿನಾಂಕ** | : | **15.02.2022** |
| **ಉತ್ತರಿಸಬೇಕಾದ ಸಚಿವರು** | : | **ಸಹಕಾರ ಸಚಿವರು** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಇರುವ ಸಹಕಾರ ಸಂಘಗಳ ಲೆಕ್ಕಪರಿಶೋಧಕರು C/A ಸಂಸ್ಥೆಗಳು ಇಂತಿಷ್ಟೇ ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಮಾಡಬಹುದು ಎಂದು ಲೆಕ್ಕಪರಿಶೋಧಕರ ವ್ಯಾಪ್ತಿ ಮತ್ತು ಸಹಕಾರ ಸಂಘಗಳ ಸಂಖ್ಯಾ ಮಿತಿಯನ್ನು ಸರ್ಕಾರದಿಂದ ನಿಗದಿಪಡಿಸಲಾಗಿದೆಯೇ; (ನಿಗದಿ ಪಡಿಸಲಾಗಿದ್ದಲ್ಲಿ ಸರ್ಕಾರದಿಂದ ನೀಡಲಾಗಿರುವ ನಿರ್ದೇಶನಗಳ ವಿವರ ನೀಡುವುದು) | ಹೌದು<br><br>ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ದಿನಾಂಕ:19.11.2021ರಂದು ಸುತ್ತೋಲೆ ಹೊರಡಿಸಿ ಸನ್ನದು ಲೆಕ್ಕಪರಿಶೋಧಕರು / ಸನ್ನದು ಲೆಕ್ಕಪರಿಶೋಧಕರ ಫರ್ಮ್ / ಕಾಸ್ಟ್ ಅಕೌಂಟೆಂಟ್ / ಕಾಸ್ಟ್ ಅಕೌಂಟೆಂಟ್ಸ್ ಫರ್ಮ್‌ರವರುಗಳಿಗೆ ಏಪ್ರಿಲ್ ಮಾಹೆಯಿಂದ ಆಗಸ್ಟ್ ಮಾಹೆಯ ಅಂತ್ಯದವರೆಗೆ ಲಭ್ಯವಾಗುವ 130 ಕೆಲಸದ ದಿನಗಳು / ಮಾನವ ದಿನಗಳಲ್ಲಿ ಲೆಕ್ಕಪರಿಶೋಧನೆ ನಿರ್ವಹಿಸಲು ಪ್ರವರ್ಗಾವಾರು ಈ ಕೆಳಕಂಡಂತೆ ಸಹಕಾರ ಸಂಘಗಳ ಸಂಖ್ಯಾಮಿತಿಯನ್ನು ನಿಗದಿಪಡಿಸಿರುತ್ತಾರೆ. |

**'ಎ' ಪ್ರವರ್ಗವಾರು ಶಾಸನಬದ್ಧ ಲೆಕ್ಕಪರಿಶೋಧಕರಿಗೆ**

| ಕ್ರ. ಸಂ. | ಸಹಕಾರ ಸಂಘಗಳ ವರ್ಗ | ಲೆಕ್ಕಪರಿಶೋಧನೆ ಕೈಗೊಳ್ಳ ಬಹುದಾದ ಗರಿಷ್ಠ ಸಂಘಗಳು | ಲೆಕ್ಕಪರಿಶೋಧನೆಗೆ ಅವಶ್ಯ ಇರುವ ಅಂದಾಜು ಮಾನವ ದಿನಗಳು |
|---|---|---|---|
| 1 | "ಎ" ಪ್ರವರ್ಗ | 03 | 60 |
| 2 | "ಬಿ" ಪ್ರವರ್ಗ | 05 | 40 |
| 3 | "ಸಿ" ಪ್ರವರ್ಗ | 10 | 30 |
| | | **18** | **130** |

**'ಬಿ' ಪ್ರವರ್ಗದ ಶಾಸನಬದ್ಧ ಲೆಕ್ಕಪರಿಶೋಧಕರಿಗೆ**

| ಕ್ರ. ಸಂ. | ಸಹಕಾರ ಸಂಘಗಳ ವರ್ಗ | ಲೆಕ್ಕಪರಿಶೋಧನೆ ಕೈಗೊಳ್ಳ ಬಹುದಾದ ಗರಿಷ್ಠ ಸಂಘಗಳು | ಲೆಕ್ಕಪರಿಶೋಧನೆಗೆ ಅವಶ್ಯ ಇರುವ ಅಂದಾಜು ಮಾನವ ದಿನಗಳು |
|---|---|---|---|
| 1 | "ಬಿ" ಪ್ರವರ್ಗ | 05 | 40 |
| 2 | "ಸಿ" ಪ್ರವರ್ಗ | 30 | 90 |
| | | **35** | **130** |

**'ಸಿ' ಪ್ರವರ್ಗದ ಶಾಸನಬದ್ಧ ಲೆಕ್ಕಪರಿಶೋಧಕರಿಗೆ**

| ಕ್ರ. ಸಂ. | ಸಹಕಾರ ಸಂಘಗಳ ವರ್ಗ | ಲೆಕ್ಕಪರಿಶೋಧನೆ ಕೈಗೊಳ್ಳ ಬಹುದಾದ ಗರಿಷ್ಠ ಸಂಘಗಳು | ಲೆಕ್ಕಪರಿಶೋಧನೆಗೆ ಅವಶ್ಯ ಇರುವ ಅಂದಾಜು ಮಾನವ ದಿನಗಳು |
|---|---|---|---|
| 1 | "ಸಿ" ಪ್ರವರ್ಗ | 43 | 130 |
| | | **43** | **130** |

| | | |
|---|---|---|
| ಆ) | ಈ ರೀತಿಯ ಸಂಖ್ಯಾ ಮಿತಿಯನ್ನು ನಿಗದಿಪಡಿಸಿ ಲೆಕ್ಕಪರಿಶೋಧಕರನ್ನು ಆಯ್ಕೆ ಮಾಡುವಲ್ಲಿ ಸಹಕಾರ ಸಂಘಗಳಿಗೆ ಇರುವ ಸ್ವಾತಂತ್ರ್ಯವನ್ನು ನಿಯಂತ್ರಿಸುವುದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮಕ್ಕೆ ಅನುಗುಣವಾಗಿರುತ್ತದೆಯೇ; | ಸದರಿ ಸುತ್ತೋಲೆಯು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಂ 63(1) ಹಾಗೂ 63(2)ರ ಅವಕಾಶಕ್ಕೆ ಅನುಗುಣವಾಗಿರುತ್ತದೆ. ಲೆಕ್ಕಪರಿಶೋಧಕರನ್ನು ಆಯ್ಕೆ ಮಾಡುವ ಸಹಕಾರ ಸಂಘಗಳ ಸ್ವಾತಂತ್ರ್ಯವನ್ನು ದಿನಾಂಕ:19.11.2021ರ ಸುತ್ತೋಲೆಯು ನಿಯಂತ್ರಿಸಿರುವುದಿಲ್ಲ. |
| ಇ) | ಲೆಕ್ಕಪರಿಶೋಧಕರ ವ್ಯಾಪ್ತಿ ಮತ್ತು ಸಹಕಾರ ಸಂಘಗಳ ಸಂಖ್ಯಾ ಮಿತಿಯನ್ನು ನಿಗದಿಪಡಿಸಿ ಸರ್ಕಾರದಿಂದ ನೀಡಲಾಗಿರುವ ನಿರ್ದೇಶನಗಳ ಪಾಲನೆಗೆ ಹಲವಾರು ಸಹಕಾರ ಸಂಘಗಳು ಪ್ರತಿರೋಧ ವ್ಯಕ್ತಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಈ) | ಬಂದಿದ್ದಲ್ಲಿ, ಸರ್ಕಾರದ ನಿರ್ದೇಶನಗಳನ್ನು ಪಾಲಿಸುವಲ್ಲಿ ಸಹಕಾರ ಸಂಘಗಳ ತೋರುತ್ತಿರುವ ಪ್ರತಿರೋಧವನ್ನು ನಿವಾರಿಸುವ ನಿಟ್ಟಿನಲ್ಲಿ ಸರ್ಕಾರದಿಂದ ಕೈಗೊಳ್ಳಲಾಗುತ್ತಿರುವ ಕ್ರಮಗಳೇನು? | ವಿವಿಧ ಜಿಲ್ಲೆಗಳ ಸನ್ನದು ಲೆಕ್ಕಪರಿಶೋಧಕರುಗಳಿಂದ ಸರ್ಕಾರಕ್ಕೆ ಮನವಿಗಳು ಸ್ವೀಕೃತವಾದ ಹಿನ್ನೆಲೆಯಲ್ಲಿ, ಈ ಬಗ್ಗೆ ಸಂಬಂಧಪಟ್ಟವರ ಸಭೆ ಕರೆದು ಸದರಿಯವರ ಮನವಿಗಳ ಬಗ್ಗೆ ಕಾಯ್ದೆ ಮತ್ತು ನಿಯಮಗಳಿಗನುಗುಣವಾಗಿ ಕ್ರಮವಿಡಲು ಸರ್ಕಾರದಿಂದ ದಿನಾಂಕ:08.02.2022 ರಂದು ಲೆಕ್ಕಪರಿಶೋಧನಾ ನಿರ್ದೇಶಕರಿಗೆ ನಿರ್ದೇಶನ ನೀಡಲಾಗಿರುತ್ತದೆ.<br><br>ಮುಂದುವರೆದು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಹೊರಡಿಸಿರುವ ದಿನಾಂಕ:19.11.2021ರ ಸುತ್ತೋಲೆಯ ಬಗ್ಗೆ ಮೂರು ಸೌಹಾರ್ದ ಸಹಕಾರಿಗಳು ಹಾಗೂ ಒಂದು ಸಹಕಾರ ಸಂಘ ಗೌರವಾನ್ವಿತ ಉಚ್ಚ ನ್ಯಾಯಾಲಯ, ಧಾರವಾಡ ಪೀಠದಲ್ಲಿ ಪ್ರಕರಣ ದಾಖಲಿಸಿದ್ದು, ಈ ಕುರಿತು ಮಾನ್ಯ ನ್ಯಾಯಾಲಯವು ಮಧ್ಯಂತರ ತಡೆಯಾಜ್ಞೆ ನೀಡಿರುತ್ತದೆ. ಪ್ರಕರಣವು ನ್ಯಾಯಾಲಯದಲ್ಲಿರುವುದರಿಂದ ಇತ್ಯರ್ಥವಾದ ನಂತರ ಪರಿಶೀಲಿಸಿ ಮುಂದಿನ ಕ್ರಮ ವಹಿಸಲಾಗುವುದು. |

**ಸಿಒ 16 ಸಿಎಲ್ಎಮ್ 2022 (ಇ)**

**(ಎಸ್. ಟಿ. ಸೋಮಶೇಖರ್)**
**ಸಹಕಾರ ಸಚಿವರು**